# ಒಂದೇ ಒಂದು

ಕರ್ನಾಟಕ [illegible] ಮಂದಿರ
ಧಾರವಾಡ

# ಮುನ್ನುಡಿ



ಇಲ್ಲಿನ ಪ್ರಧಾನಪಾತ್ರಗಳಿಗೆಲ್ಲಾ ಒಂದೊಂದೇ ಮಕ್ಕಳಿರುವದರಿಂದ ನಾಟಕಕ್ಕೂ ಈ ಹೆಸರನ್ನೇ ಕೊಟ್ಟಿರುವರು.

ನನ್ನ ಮಿತ್ರರಾದ ಮ॥ರಾ॥ ಆಹೋಬಲಾಚಾರ್ಯರು ಈ ದೃಶ್ಯವನ್ನು ರಂಗಸ್ಥಳದಲ್ಲಿ ಪ್ರದರ್ಶಿಸಿದ ದಿನ ನನ ಗಾಭಾವನೆಗಳನ್ನು ಎಂದಿಗೂ ಮರೆಯುವಂತಿಲ್ಲ, “ ಈ ನಾಟಕವನ್ನು ಕನ್ನಡಕ್ಕೆ ಪರಿವರ್ತನೆಮಾಡಿ ರಂಗಭೂಮಿಗೆ ತರಬೇಕು'' ಎಂದು ಅಂದೇ ಸಂಕಲ್ಪ ಮಾಡಿದೆನು. ಶ್ರೀಯುತ ಆಚಾರ್ಯರೂ ನನ್ನ ಆಶೆಗೆ ಒತ್ತಾಸೆಯಾಗಲು ಸಮ್ಮತಿಸಿ, ಇಂಗ್ಲೀಷ್ ಪ್ರತಿಯೊಂದನ್ನು ಕೊಟ್ಟರು. ಇದನ್ನು ಪರಿವರ್ತಿಸುವುದರಲ್ಲಿ ಮಿತ್ರರನೇಕರು ನೆರವಾಗಿರುವರು! ಅಲ್ಲದೆ ಅಭಿನಯಕಾರರೂ ಪದಗಳ ಸರಣಿಯನ್ನು ಅಂದುನೋಡಿ ಒಪ್ಪಿಗೆಯನ್ನಿತ್ತಿರುವರು! ನಾನು ಇಂತಹಕಾರ್ಯಕ್ಕೆ ಕೈಹಾಕಿದುದು ಹೊಸದು. ಪರಿವರ್ತನೆಯಲ್ಲಿ ತಪ್ಪುಗಳಿದ್ದರೆ ಕ್ಷಮಿಸಿ.

ನನಗೊಂದು ಆಶೆಯುಂಟು ಅದನ್ನು ಹೇಳು ವದೇನೂ ತಪ್ಪಾಗದಿರಲಾರದು. ಶ್ರೀಯುತ ಅಹೋಬಲಾಚಾರ್ಯ ಎಂ. ಎ. ಇವರು ಇಂತಹ ದೇಶ ವಾತ್ಸಲ್ಯದ ದೃಶ್ಯಗಳನ್ನು ಪ್ರದರ್ಶಿಸುವುದರಲ್ಲಿ ಅಗ್ರಗಣ್ಯರಾಗಿ ಹೆಸರು ಪಡದಿರುವರು. ಇಷ್ಟುಮಾತ್ರವಲ್ಲ ಮಕ್ಕಳ ಉಪಯೋಗಕ್ಕಾಗಿ ಹೊಸಬಗೆಯ ರಂಗ ಮಂದಿರಗಳನ್ನು ಸ್ಥಾಪಿಸಲು ಸನ್ನಾಹ ಮಾಡುತ್ತಿರುವರು, ಇವರಂತೆಯೇ ವಿದ್ಯಾವಂತರೂ, ತರುಣರೂ ಈ ನಾಟಕವನ್ನು ಸಾರವತ್ತಾದ ಅಭಿನಯದೊಡನೆ ಪ್ರದರ್ಶನ ಮಾಡುವುದಾದರೆ ನಾಟಕ ಬರೆದ ಕವಿಗಳ ಮತ್ತು ಭಾಷಾಂತರಕಾರನ ಶ್ರಮವು ಸಾರ್ಥಕವಾದೀತೆಂದು ನಂಬುವೆನು.

**ಎ. ಎಣ್ ಸುಬ್ಬರಾವ್**



ಪಾತ್ರಗಳು :—ಡಾಕ್ಟರ್
ಹೆಂಗಸು
ಮಾರ್ವಾಡಿ
ರೈತ

# ಒಂದೇ ಒಂದು.



ದೃಶ್ಯ :—ನಮ್ಮ ದೇಶದ ಒಂದು ಹಳ್ಳಿಯಲ್ಲಿರುವ ಬಡವನ ಗುಡಿಸಲು ಒಳಭಾಗದಲ್ಲಿರುವ ಸಾಮಾನುಗಳನ್ನು ನೋಡಿದರೆ ಇದೇಕೊಠಡಿಯು ಅಡಿಗೆಮನೆಗೂ ಉಪಯೋಗವಾಗುತ್ತಿರುವುದು. ಒಂದು ಮೂಲೆಯಲ್ಲಿ ಹೆಂಗಸೊಬ್ಬಳು ಸ್ವಲ್ಪ ಅಕ್ಕಿಯನ್ನು ಮಾಡುತ್ತ ಕುಳಿತಿರುವಳು. ಮತ್ತೊಂದುಕಡೆ ಚೌಕಿ ಮತ್ತು ಕುರ್ಚಿ, ಚೌಕಿಯ ಮೇಲೆ ಔಷಧಿಗಳಿಂದಕೂಡಿದ ಶೀಷೆಗಳು. ಜೋಡಿಸಿಟ್ಟ ಕಾಗದದ ಚೂರುಗಳು. ಆ ಕುರ್ಚಿಯ ಮೇಲೆ ಮನುಷ್ಯನೊಬ್ಬನು ಕುಳಿತಿರುವನು. ಈ ತನನ್ನು ನೋಡಿದೊಡನೆಯೇ ಡಾಕ್ಟರ್ ಎಂಬುದು ವ್ಯಕ್ತವಾಗುವುದು. ಪರದೆಯು ಮೇಲಕ್ಕೆಹೋಗುವುದು. ಕೆಲವುಕಾಲ ನಿಶ್ಶಬ್ದ ನೀರವ.)

### ಡಾಕ್ಟರ್

ನಾನು ಎಷ್ಟುಹೊತ್ತಿನಿಂದ ಈ ಶೀಷೆಗಳ ಮುಂದೆ ಕುಳಿತಿರುವೆನೆಂಬುದುಗೊತ್ತೇ ?

### ಹೆಂಗಸು

ಮೂರುಗಂಟೆ, ಇನ್ನೂ ಹೆಚ್ಚಾಗಿದ್ದರೂ ಆಗಿರಬಹುದು.

ಡಾಕ್ಟರ್

ಮೂರುಗಂಟೆಗಳು! ನಾನು ಬಹಳ ಕೆಲಸಮಾಡುತ್ತಿದ್ದೇನೆ ನೋಡು! ಕೈ ಕಟ್ಟಿಕುಳಿತು ಬಲು ದೊಡ್ಡ ಕೆಲಸ ಮಾಡುತ್ತಿದ್ದೇನೆ.

ಹೆಂಗಸು

ಹೌದು, ಈ ದಿನ ಯಾರೂ ಔಷಧಿಗೆಬರಲಿಲ್ಲ.

ಡಾಕ್ಟರ್

ಒಂದು ಪಿಳ್ಳೆಯೂಇಲ್ಲ!

(ಖಿನ್ನನಾಗಿ ಹೇಳುವನು)

ಆನಂದಿಸು, ಇದನ್ನುನೋಡಿ ಸಂತೋಷಪಡು!
ಈ ಹಳ್ಳಿಗೆ ಇನ್ನು ನಮ್ಮ ಅಗತ್ಯವಿಲ್ಲ!
ರೋಗಗಳೇ ನಿಮಗೆ ವಂದನೆಗಳು.
ಇನ್ನು ನಿಮಗೆ ಎದುರಿಲ್ಲ!
ದುಃಖವೇ ನಮಸ್ಕಾರ.!
ವೈದ್ಯವೇ ಕಡೆಯ ವಂದನೆ!
ಅಯ್ಯೋ! ನಮ್ಮವೃತ್ತಿ ಮುಳುಗಿ ಹೋಯಿತು.
ಇಲ್ಲಿನ ಕೆಲಸ ಮುಗಿಯಿತು! ಬಾ ಹೊರಡುವ!
ಆನಂದಿಸು! ಅನುಭವಿಸು!

ಹೆಂಗಸು

ಇನ್ನು ಉಳದಿರುವುದು ಒಂದೇ ಒಂದು ಆನಂದ! ರಾಂ ರಾಂ! ರಾಂ ರಾಂ ಎಂದು ಪ್ರತಿನಿತ್ಯದಲ್ಲೂ ಮನೆಯಮುಂದೆ ಚೀರುತ್ತ ಹೋಗುವ ಉತ್ಸವ

ಗಳನ್ನು ನೋಡಿನೋಡಿ ಸಾಕಾಗಿದೆ. ನಮ್ಮ ಸತ್ವವನ್ನುಹೀರಿ ಈದುರವಸ್ಥೆಗೆ ತಂದಿರುವ ನಾನಾ ರೋಗಗಳ ವಿಷಯವು ನಿಮಗೆ ಗೊತ್ತು. ಆ ರೋಗ ಗಳನ್ನು ಹಿಂಬಾಲಿಸಿಬರುವ ದುಃಖಪರಂಪರೆಗಳು ಮಾತ್ರ ನನಗೆ ಗೊತ್ತು—

ಮಲೇರಿಯವೆಂಬ ಘೋರ ರೋಗದಿಂದ ನರಳು ತಿದ್ದರೂ, ನೇಗಿಲು ಹಿಡಿದು ಉತ್ತೇತೀರಬೇಕಾದ ರೈತನ ದುಃಖವು ನನಗೆ ಚೆನ್ನಾಗಿ ತಿಳಿದಿದೆ.

ಹೊಟ್ಟೆಗಿಲ್ಲದೆ ಹಾಹಾಕಾರ ಪಡುವ ಹೆಂಗಸು ಮಗುವನ್ನು ಹೆರುವಾಗಲೆಲ್ಲಾ ಅನುಭವಿಸುವ ಪ್ರಸವ ವೇದನೆಯನ್ನು; ಆಘೋರಯಾತನೆಯನ್ನು ನಾನರಿತಿರುವೆನು.

ಸತ್ತ ತಾಯಿಯ ಮೊಲೆಹಾಲನ್ನು ಕುಡಿಯ ಬೇಕೆಂದು; ಒಣಗಿದ ಸ್ಥನಗಳನ್ನು ಚೀಪುವ ಹಸು ಗೂಸಿನ ಸಂಕಟವನ್ನು ಚೆನ್ನಾಗಿಬಲ್ಲೆ.

ದೇವರು ಅನುಕೂಲ ಕೊಟ್ಟಿದ್ದರೆ ಅವರೆಲ್ಲರಿಗೂ ವೈದ್ಯರ ಸಹಾಯ ಬೇಕೇಬೇಕು!

## ಡಾಕ್ಟರ್

ಸಾಕುಮಾಡು.!
ಸತ್ಯವನ್ನು ಹೇಳಿ ನನ್ನ ಎದೆಯಿರಿಯಬೇಡ!
ನಾನು ಕಂಡುಬಲ್ಲೆ.!
ನನಗೆ ಇದು ಗೊತ್ತುಂಟು.!

ಸತ್ಯವು ದುಃಖವನ್ನುಂಟುಮಾಡುವುದಾದರೆ ;
ಮನುಷ್ಯರು ಮಿಥ್ಯೆಗೆ ಮೊರೆಹೋಗುವರು. ! .
ಇಂತಹ ಭ್ರಾಂತಿಯಿಂದಲೇ ಆ ದೇವರ ಸೃಷ್ಟಿ !
ಇಲ್ಲಿನ ಈಬಗೆಯ ತಳಮಳವೇ ಅಲ್ಲಿನ ಆನಂದಕ್ಕೆ
ಮಹತ್ವವಿತ್ತಿದೆ !

ಹೆಂಗಸು

ಮನೆಯಲ್ಲಿ ಒಂದು ತೊಟ್ಟೂ ಹಾಲಿಲ್ಲಾ !
ಮಗುವುಸಾಯುತ್ತಿದೆ.

ಡಾಕ್ಟರ್

ಹಾಗಿದ್ದರೆ ಆ ಕೂಸಿಗೆ ದೇವರೇಗತಿ !

ಹೆಂಗಸು

ಏಕೆ ಇಷ್ಟೊಂದು ಕಠಿಣವಾದಿರಿ !
ನಿಮ್ಮ ಮನವೇಕೆ ಪಾಷಾಣವಾಯಿತು !

ಡಾಕ್ಟರ್

ಕೂಸು ಬೇಕೆಂದು ಬಯಸಿದವಳು ನೀನು !
ದೇವರನ್ನು ಬೇಡಿಕೊಂಡವಳೂ ನೀನು !
ಆ ದೇವನು ನಿನಗೆ ಮಗುವನ್ನು ಕೊಟ್ಟನು ;
ಆದರೆ ಅದಕ್ಕೆ ಹಾಲುಕೊಡಲಿಲ್ಲ. !
ಮಗುವನ್ನುಕೊಟ್ಟು, ಅದನ್ನು ಬೆಳೆಸಲು ಹಾಲನ್ನೇಕೆ ಕೊಡಲಿಲ್ಲಾ ?
ನೀನು ಮತ್ತೊಮ್ಮೆ ಆವನನ್ನು ಪ್ರಾರ್ಥಿಸುವಾಗ ಇದನ್ನು ಪ್ರಶ್ನಿಸು.

**ಹೆಂಗಸು**

ಈ ಹೊತ್ತು ಹಾಲಿಲ್ಲದಿದ್ದರೆ ಮಗುವು ಸಾಯು....

**ಡಾಕ್ಟರ್**

ಓ ! ಇದೊಂದು ಪ್ರಾರಭ್ಧ. !

ಇಲ್ಲಿ ನಾನು ವೈದ್ಯಮಾಡಲು ಹಾತೊರೆಯುತ್ತಿರುವೆನು; ಅಲ್ಲಿ ರೈತರು ರೋಗದಲ್ಲಿ ಮುಳುಗಿ ಸಂಕಟಪಡುತ್ತಿರುವರು. ನನಗೂ ರೈತರಿಗೂ ಮಧ್ಯದಲ್ಲಿ ದಾರಿದ್ರ್ಯ ಪ್ರವಾಹ. ನಮ್ಮಿಬ್ಬರಲ್ಲಿ ಯಾರೂ ಸುಂಕವನ್ನು ಕೊಟ್ಟು ಈ ಹೊಳೆಯನ್ನು ಹಾಯಲಾರೆವು !

ಇಲ್ಲಿ ಅನೇಕವೇಳೆ ಸಾಯುವುದಕ್ಕಾಗಿಯೇ ಮಕ್ಕಳು ಹುಟ್ಟುತ್ತಿವೆ. ಆದರೆ ನನ್ನ ಮಗುವಿಗೆ ಆಗತಿ...........

ನಮಗೆ ಇರುವುದು ಒಂದೇ ಒಂದು !

ಪ್ರಿಯೇ ! ಬದುಕಿಸಿಕೊಳ್ಳುವೆನು. ! ದುಃಖಿಸಬೇಡ !

ಇತರ ಮಕ್ಕಳ ಗೋರಿಯನ್ನಾದಗೂ ಅಗೆದು ನನ್ನ ಮಗುವನ್ನು ಉಳಿಸುಕೊಳ್ಳುವೆ........

ಅವನವನಪಾಡು ಅವನಿಗೆ !

ಇಲ್ಲದಿದ್ದರೆ ಸಾವೇ. !

**(ಮಾರ್ವಾಡಿಯ ಪ್ರವೇಶ.)**

(ಸ್ಥೂಲದೇಹ. ಮುಗುಳುನಗೆಯ ತೋರಿಕೆ. ಉದ್ದೇಶದ ವಿಷಯದಲ್ಲಿ ಯಾರೂ ಮೋಸಹೋಗುವಂತಿಲ್ಲ.)

(ಹೆಂಗಸು ಹೊರಟುಹೋಗುವಳು.)

ಮೂರ್ವಾಡಿ

ಡಾಕ್ಟರ್ ಸಾಬ್, ಕ್ಷೇಮವೇ!

ನಿಮ್ಮದೂ ಮನೇಲಿ ಎಲ್ಲರೂ ಕ್ಷೇಮಇದ್ದಾರೆ!

ಮಗೂ ಚಂದಾಗಿ ಇದ್ದಾದೆ!

ನಿಮ್ಮದೂ ಮಗೀಗೆ ಒಂದಿನಾಮತಂದ್ಕೊಡ್ಬೇಕು ನೋಡೀ!

ಡಾಕ್ಟರ್

ನೀನು ಇನಾಮುಕೊಡುವುದು ನನಗೆಗೊತ್ತು!

ಕೆಲಸ ಆಗಬೇಕಾದರೆ!

ಇಲ್ಲಿ ಕುಳಿತುಕೊ!

ಮೂರ್ವಾಡಿ

(ಕುಳಿತುಕೊಂಡು)

ನಂದು ದಾನ ಧರ್ಮ ಲೋಕಾ ಎಲ್ಲ ಕೊಂಡಾಡತಾದೆ. ಇನ್ನೂ ಹೆಚ್ಚಾಗಿ ಕೊಡಬೇಕೂ ಅಂತ ಅನ್ನಸ್ತಾದೆ!

ಏನ್ ಮಾಡಲಿ! ನೋಡಿ! ನಾನುಬಡವ!

ನೋಡಿ! ಅದುಸಾಹೇಬರ್ಗೆ ಒಂದು ವಜ್ರದ್ದು ಉಂಗರ ಮಾತ್ರಕೊಟ್ಟೆ............

ಡಾಕ್ಟರ್

ಸಾಕು! ನಿನ್ನಪುರಾಣ ಸಾಕು!

ನೀನು ಬಂದದ್ದೇನು ಹೇಳು!

ಮೂರ್ವಾಡಿ

ನಿಮ್ದು ಯಾವಾಗಲೂ ಕೆಲ್ಸಮಾಡ್ತಾಇರೋದು!
ನಿಮಗೆ ಪುರಸತ್ತು........

ಡಾಕ್ಟರ್

ನನ್ನ ಕೆಲಸಕಟ್ಟಿಕೊಂಡು ನೀನೇನು ಮಾಡುತ್ತೀ
ನಾನು ಕೊಡಬೇಕಾದ ಸಾಲವನ್ನೇನಾದರೂ
ಕೇಳಲು ಬಂದಿದ್ದರೇ!........

ಮೂರ್ವಾಡಿ

ಬರಾಬರ್ ಹೇಳಿದ್ರಿ!
ನಿಮ್ದು ಊಹೆ ಸರಿ!

ಡಾಕ್ಟರ್

ಹಾಗಾದರೆ ಹೇಳುತ್ತೇನೆ ಕೇಳು!
ನಿನಗೆ ಕೊಡಲು ನನಲ್ಲಿ ಒಂದು ಕಾಸೂಇಲ್ಲ!
ಸಲ್ಪ ತಡೆಯ ಬೇಕು.

ಮೂರ್ವಾಡಿ

ಎಷ್ಟುದಿನ?

ಡಾಕ್ಟರ್

ನಾನು ಸಾಯುವವರಿಗೆ!
ನಿನ್ನ ಬಡ್ಡಿಯಿಂದ, ಚಕ್ರಬಡಿಯಿಂದ ಊರೆಲ್ಲ
ಸುಟ್ಟು ಹಾಳಾಗುವವರಿಗೆ!

ಮೂರ್ವಾಡಿ

ಬೇಡ್ರಿ ಸಾಮಿ! ಇಷ್ಟೊಂದು ಕೋಪಾ ಮಾಡ
ಬೇಡ್ರಿ!

ನನ್ಗೆ ಬಡವ್ರನ ಕಂಡ್ರೆ ಬಲ್ ಪಿರೀತಿ ಇದ್ದಾದೆ!
ನಾನು ಒಂದು ಬಡವ ನೋಡೀ!

ಡಾಕ್ಟರ್

ಅಯ್ಯೋ ಪಾಪ!
ಎಷ್ಟೊಂದು ದಯ!
ದಯವೆಲ್ಲ ಈ ನಿನ್ನ ಬಡದೇಹದಮೇಲೆ!

ಮಾರ್ವಾಡಿ

ಒಳ್ಳೇದು! ಹೋಗಲಿ ಬಿಡ್ರಿ!
ಬೇರೇ ಮಾತಾಡೋಣ!
ಈಗ ಏಷ್ಟು ಕೊಡ್ತೀರಿ!
ಎಲ್ಲಾ ಈಗ್ಲೇ ಕೊಡ್ಬೇಡ್ರಿ!
ಬಡ್ಡೀ ಫೈಸಲ್ ಮಾಡಿದ್ರೆ! ಸಾಕು!
ನೋಡೋಣ ಲೆಖ್ಖಾ ಹಾಕ್ತೀನಿ!
ವಂಭತ್ತು ಮೂರಲ್ಲ........

ಪುಸ್ತಕದ ಹಾಳೆಗಳನ್ನು ತೆಗೆದು ಲೇಖನಿ ಹಿಡಿದು ಲೆಖ್ಖ ಹಾಕಲೆತ್ನಿಸುವನು)

ಡಾಕ್ಟರ್

ಈ ಲೆಖ್ಖಾಚಾರದ ಮಾತುಮಾತ್ರ ಎತ್ತಬೇಡ!
ನನ್ನ ಮಗು ಯಾವಗಲೋ ಎನೋ!
ಒಂದುವಳಲೆ ಹಾಲುಸಿಕ್ಕದೆ ಸಾಯುತ್ತಾ ಇದೆ.
ಮನೆ ಬಿಟ್ಟು ಹೊರಡು!

ನಾನೇನಾದರೂ ಹೆಚ್ಚು ಕಮ್ಮಿ ಮಾತಾಡೋ
ಹಾಗೆ ಮಾಡಬೇಡ.

**ಮಾರ್ವಾಡಿ**

ಗೊತ್ತಾಯ್ತು ! ತಿಳಿಯಿತು !
ಕಷ್ಟಪಡೋರ್ನ ಬಹೂತ್ ಜನಾ ನೋಡಿದೇನೆ.
ಹೀಗೆ ಕೆಲವು ದಿನಹೋದ್ರೆ ಬರಾಬರ್ ಆಗ್ತಾದೆ.
ನಿಮ್ಗೆ ವಯಸ್ಸು ಚಿಕ್ಕದು.
ಕೊಂಚ ದೂಡ್ ಕಳುಹಿಸಬೇಕು ಅನ್ನಸ್ತದೆ!
ಎನ್ಮಾಡ್ಲಿ ನೋಡಿ; ಈಷ್ಟೊತ್ತಿಗೆ ಹಾಲೆಲ್ಲಾ
ಪೇಟೇಲಿ ಮಾರಾಟ ಆಗೋಗ್ಬಿತೆ
ನನ್ಮಗೀಗೂ ಮನೇಲಿ ಹಾಲಿಲ್ಲಾ ! ನಿಮ್ಗೆ ಗೊತ್ತಿ
ರಬಹುದ್ದು ನನ್ನಿರೋದೂನೂ ಒಂದೇಒಂದು !
ಎನ್ಮಾಡಲಿ, ನನಗೂ ದುಃಖ ಆಗ್ತಾದೆ.
ಆಗಲಿ ಇನ್ನೊಂದು ಸಾರಿ ಬಂದು ನೋಡ್ತೀನಿ.
ದೇವರ್ದುಗುಡೀಗೆ ಹೋಗೋ ಹೊತ್ತಾಯ್ತು,
ರಾಂ! ರಾಂ! ಸಾಮೀ! ನಾನು ಹೊರಡ್ತೀನಿ. !
ದೇವರದಯ ನಿಮ್ದುಗೇ ಇರಲಿ.

(ಮಾರ್ವಾಡಿಯು ಅದೃಶ್ಯನಾಗುವನು.)
(ಹೋಗುವುದನ್ನೂ ನೋಡುತ್ತ)

**ಡಾಕ್ಟರ್**

ದೇವರದಯ ಇಲ್ಲೆಲ್ಲಿ!
ಆವೆಲ್ಲಾ ನಿನಗೆ
(ಹೆಂಗಸು ಬರುವಳು)

ಪ್ರಿಯೇ ! ಈ ಮಾರ್ವಾಡಿ! ನಮಗೆ ದೇವರ ದಯ ಕೊಡೋದಕ್ಕೆ ಬಂದಿದ್ದ !

ಆ ದೇವರನ್ನೇ ಕುಡಿದು ಬಿಡೋಣ. !
ದೇವರಿಲ್ಲದಿದ್ದರೆ
ಮೂವರಿಗೂ ಆಗುವಷ್ಟು ವಿಷ ಇದ್ದೇಇದೆ. !
ನಾನು ಡಾಕ್ಟರ್ !
ಕೊಲ್ಲಲು ನನಗೆ ರಹದಾರಿಯುಂಟು.

### ಹೆಂಗಸು

ಇವತ್ತು ನಿಮಗೆ ತುಂಬಾವ್ಯಾಕುಲವಾಗಿದೆ.
ಮನಸ್ಸನ್ನು ಗಟ್ಟಿ ಮಾಡಕೊಳ್ಳಬೇಕು.

### ಡಾಕ್ಟರ್

ಎದೆಯನ್ನು ಕಲ್ಲುಮಾಡುವದನ್ನು ನನಗೆ ನೀನು ಕಲಿಸಬೇಕಾಗಿಲ್ಲ.!

ಹಳ್ಳಿಗೆ ಬಂದು ಜನರಿಗೆ ಉಪಕಾರ ಮಾಡಬೇಕೆಂದು ಹೇಳಿದಾಗ ; ನಮಗೊದಗಬಹುದಾದ ಕಷ್ಟಗಳನ್ನು ಸಹಿಸಬೇಕಾಗುವುದೆಂದು ಹೇಳಿದುದನ್ನು ಮರೆತೆಯಾ !

ನನ್ನ ಸಹನೆಯನ್ನು ತೋರ್ಪಡಿಸಲು; ಈಬೆರಳನ್ನು ದೀಪದ ಜ್ವಾಲೆಯಲ್ಲಿ ಹಿಡಿದಾಗ, ನೀನು ಕಿರುಚಿಕೊಂಡು ದೀಪವನ್ನು ಆರಿಸಿ ; ಆ ಕಗ್ಗತ್ತಲೆಯಲ್ಲಿ ಏಷ್ಟೇ ಕಷ್ಟಬರಲಿ ತಾಳ್ಮೆಯಿಂದ ಸಹಿಸುವೆವುಎಂದು ಪ್ರಮಾಣ ಮಾಡಲಿಲ್ಲವೇ

ಮನಸ್ಸನ್ನು ಇನ್ನೂ ಗಟ್ಟಿಮಾಡಬೇಕೆನ್ನು ವೆಯಾ !

ನಿನ್ನ ಉಪವಾಸವನ್ನು ! ಈ ಮಗುವು ಹೊಟ್ಟೆ ಗಿಲ್ಲದೆ ಸಾಯುವುದನ್ನು, ನೋಡುತ್ತಿರ ಬೇಕೆನ್ನು ವೆಯಾ! ಅಯ್ಯೋ............

**ಹೆಂಗಸು**

ನಾನು ಕಾಠಿಣ್ಯದಿಂದಿರಬೇಕೆಂದುದು, ನಿಮ್ಮ ವಿಷ ಯದಲ್ಲಲ್ಲ !

ಅದು ಇತರರ ವಿಷಯದಲ್ಲಿ !

ಪ್ರತಿಯೊಬ್ಬನೂ ತನ್ನ ಕ್ಷೇಮಲಾಭವನ್ನು ತಾನು ನೋಡಿಕೊಳ್ಳುವನು.

ನೀವೂ ಹಾಗೆ ಮಾಡಬೇಕು.

ರೋಗಿಗಳು ಬಂದು ಔಷಧಿ ಕೇಳಿದರೆ ಹಣ ತೆಗೆದುಕೊಳ್ಳದೆ ಔಷಧಿ ಕೊಟ್ಟುಬಿಡುವಿರಿ !

ಅವರು ನಿಮಗೆ ಏನೂ ಮಾಡುವುದಿಲ್ಲ !

ನೀವು ಕೊಡುವ ಔಷಧಿಗೆ ತಕ್ಕಹಣ ಕೊಡಬೇ ಕೆಂದು ಹೇಳಬೇಕು !

ನಮಗೆ ಉಳಿದಿರುವುದು ಇದೊಂದೇ ಮಾರ್ಗ.

ನಾನು ಬೇಡುವುದು ನನ್ನ ಉಪಯೋಗಕ್ಕಲ್ಲ.

ಮಗುವಿಗಾಗಿ ನಾನು ಕೇಳುವೆನು !

(ಕೃಶವಾದ ಅಂಗಾಂಗವುಳ್ಳ ವೃದ್ಧನ ಪ್ರವೇಶ. ಈತನು ಹುಚ್ಚುಹುಚ್ಚಾಗಿ ಮಾತನಾಡುವನು. ಸಂಸಾರದಲ್ಲಿ ಹೆಚ್ಚು ಕಷ್ಟ ಅನುಭವಿಸಿದವನ ಮುಖಭಾವ)

**ರೈತ**

ದಾಕ್ತರ್ ! ದಾಕ್ತರ್! ನನ್ನ ಮಗ ಬದುಕ್ಸಿ !
ಮಗ ಉಳಿಸಿಕೊಡೀ ಬುದ್ದೀ !
ಸಾಯ್ತಾಅದೆ, ಜೀವ್ದಾನಾಮಾಡ್ರಿ !
ಎನ್ಮಾಡ್ಲೀ, ಮೊದಲೇ ಬರಬೇಕಾಗಿತ್ತು, ಆಗ್ನಿಲ್ಲ!
ಭಗವಂತ ನಿಮಗೆ ವಳ್ಳೇದ ಮಾಡ್ತಾನೆ.
ಹರಸ್ತೀನಿ ಬುದ್ದೀ.
ಪ್ರೀತಿಮಾಡ್ತೀನೀ ! ಸ್ವಾಮಿ !

**ಡಾಕ್ಟರ್**

ಹರಕೆಗಳು ! ! ! ಪ್ರೀತಿ !
(ಹುಚ್ಚಾಗಿ ನಕ್ಕನು.)
ಹರಕೆಗಳು ! ಒಳ್ಳೇ ಹರಕೆಗಳು.
ನನ್ನ ಮಗುವಿಗೆ ಈ ಹರಕೆಗಳನ್ನೇ ಕುಡಿಸಲೇ !
ನಿನ್ನ ಪ್ರೀತಿಯಿಂದಲೇ ಮಗುವಿನ ಪ್ರಾಣ ಉಳಿಸಲೆ. !
ಹರಕೆಗಳು, ಅ ಹ ಹ ಹ............
ಹರಕೆಗಳು ಒಳ್ಳೇ ಹರಕೆಗಳು............

**ರೈತ**

ಯಾಕೆ ಈಟೊಂದು ಕಟಿಣಾದ್ರೀ ಬುದ್ದೀ !
ನಿಮ್ಮಗಾ ಪ್ರೀಗ್ನಾತಿಲ್ವಾ! ಬನ್ರಿಬುದ್ದೀ !
ಕಾಲಿಗ್ಬೀಳ್ತೀನಿ ಬನ್ನಿಬುದ್ದೀ !

**ಡಾಕ್ಟರ್**

ನನ್ನ ಮಗುವನ್ನು ಪ್ರೀತಿಸುವುದು!

ನನ್ನ ಮಗುವನ್ನು ಪ್ರೀತಿಸುವುದು!

ಆ ಹಾ ಹ! ಅದನ್ನು ಹೇಳಬೇಡ! ........

ನನ್ನ ಮಗುವನ್ನು ಪ್ರೀತಿಸದಿದ್ದರೆ ಆಗಲೇ ಬರುತಿದ್ದೆ!

ನನ್ನ ಮಗುವು ಹಾಲಿಗಾಗಿ ಬಾಯಿಬಾಯಿ ಬಿಡುತಿರುವುದು ನಿನಗೆ ಗೊತ್ತಿಲ್ಲವೆ!

ಮಗುವಿಗೆ ಹಾಲು ಕುಡಿಸದೆ ಇಲ್ಲಿಂದ ಹೊರಡುವಂತಿಲ್ಲ!

ಹಾಲು ಕೊಳ್ಳುವುದಕ್ಕೆ ನನ್ನಲ್ಲಿ ಕಾಸಿಲ್ಲ!

**ರೈತ**

ಸತ್ಯಾಗಿ ಹೇಳ್ತೀನಿ ಬುದ್ದೀ!

ತಮಗೆ ಕೊಡಾಕೆ ನನ್ತಾವು ಏನೂ ಇಲ್ಲ!

ದಯಮಾಡಿ ಮಗಾ ಉಳಿಸಿಕೊಡಿ, ದೇವರು ಕೊಟ್ಟರೆ ವಂಚನೆ ಮಾಡೋಕಿಲ್ಲ.

ನಾನು ಇನ್ನು ಹೋಯ್ತೀನಿ ಸಾಮೀ!

ನಿಮಗೇನಾರಾ ಕರುಳುಚುರಿಕ್‌ಎಂದ್ರೆ ಹಿಂದೆನೇ ಬನ್ನಿ—ನಾನು ಹೋಗ್ತೀನಿ. ಆ ಭಾವಿದಂಡೇ ಮನೇಲಿವ್ನಿ

(ಹೊರಟು ಹೋಗುವನು.)

**ಡಾಕ್ಟರ್**

ನನ್ನ ಮನಸ್ಸು ಗಟ್ಟಿಮಾಡಿದ್ದೇನೆ!
ನೋಡು ! ಕಟ್ಟಕಡೆಗೆ ನಾನೇ ಗೆದ್ದೆ.
ಬದುಕುವದಕ್ಕೆ ಇದೊಂದೇ ಮಾರ್ಗ.
ಬೇರೆ ಮಾರ್ಗವು ಸಾವಿಗೀಡು ಮಾಡುವದು.

(ಶೀಶಿಗಳನ್ನು ತಬ್ಬಿಕೊಂಡು.)

ಪ್ರಿಯಪಾತ್ರ ಶೀಶೆಗಳೇ!
ನಿಮನ್ನು ಆಲಿಂಗಿಸುವೆನು. !
ಅಮೌಲ್ಯವಾದ ಔಷಧಿಗಳೇ!
ನಿಮ್ಮ ವಾಸವು ಶ್ರೀಮಂತರ ಹೊಟ್ಟೆಯಲ್ಲಿ!
ಅವೇ ನಿಮ್ಮ ಅರಮನೆಗಳು !
ಬಡವರ ಮನೆಯನ್ನು ನೀವು ನೊಡುವದಿಲ್ಲ.
ಇನ್ನುಮೇಲೆ ನಿಮಗೆ ಬಡವರ ಮನೆಯ ದುರ್ಗಂಧ ವಾಯುವಿನ ಸಂಪರ್ಕ ತಪ್ಪಿತು.
ಚಿನ್ನ ಬೆಳ್ಳಿಗೆ ಮಾತ್ರ ನಿಮ್ಮ ಮಾರಾಟ !
ದಯಾ, ದಾಕ್ಷಿಣ್ಯ, ಹರಕೆ ಇವೆಲ್ಲ ಬರಿಯ ಭ್ರಾಂತಿ!

**ಹೆಂಗಸು**

ಪ್ರಿಯಾ! ಹೋಗಿ, ಆ ಮಗುವನ್ನು ಬದುಕಿಸಿ! ಹೊರಡಿ !

**ಡಾಕ್ಟರ**

ನನ್ನಿಂದ ಸಾಧ್ಯವಿಲ್ಲ. !
ನಾನು ಕಠಿಣ ಹೃದಯ !
ನನ್ನ ಹೃದಯವು ಪಾಷಾಣ !

ನಾನು ಅಲ್ಲಾಡಿಸಲಸಾಧ್ಯವಾದ ಪರ್ವತ. !
ನಾನು ಆ ಮಾರವಾಡಿ!
ನಾನೊಬ್ಬ ಧನಿಕ !

**ಹೆಂಗಸು**

ಕಾಲಿಗೆಬಿದ್ದು ಕೇಳಿಕೊಳ್ಳುವೆನು.
ಆ ಬಡವನ ಮಗುವನ್ನು ದುಕಿಸಿ. !
ಬಡವರನ್ನು ಸೇವಿಸುವೆವು ;
ಬರುವ ಕಷ್ಟಗಳಿಗೆ ಎದರಿಸಿ ನಿಲ್ಲುವೆವು ;
ಎಂದು ಪ್ರಮಾಣ ಮಾಡಲಿಲ್ಲವೆ-
ಇದೀಗಜೀವನ. !

ಪ್ರಿಯಾ! ಎದೆಗುಂದದೆ ನಮ್ಮ ಕರ್ತವ್ಯವನ್ನು ನಾವು ಮಾಡೋಣ !

**ಡಾಕ್ಟರ**

(ಸ್ವಲ್ಪಹೊತ್ತು ಸುಮ್ಮನಿದ್ದು)

ಕಟ್ಟಕಡೆಗೆ ನೀನು ಹಿಂದಿನಂತೆಯೇ ಮಾತನಾಡುವೆ.

ಪ್ರಿಯೇ; ಇದೋ ನಾನು ಹೊರಟೆ!

ಆದರೆ ಮತ್ತೆ ಜ್ವಲಿಸುತ್ತಿರುವ ಉರಿಯಲ್ಲಿ ಬೆರಳನ್ನಿಟ್ಟಾಗ ಆರಿಸಲೆತ್ನಿಸಬೇಡ !

(ಹೊರಡಲು ಸಿದ್ಧನಾಗುವನು)

**ಮುದುಕ**

ತೋಳುಗಳಲ್ಲಿ ಮಗುವನ್ನು ಮಲಗಿಸಿಕೊಂಡು ಒಂದು ಹಾಲು ಬಟ್ಟಲು ಹಿಡಿದುಕೊಂಡು ಗಾಬರಿಯಿಂದ ಮತ್ತೆ ಪ್ರವೇಶಿಸುವನು)

ಡಾಕ್ಟರ್, ಇಗೋ ಹಾಲನ್ನು ತಿರಿದು ತಂದಿರು
ವೆನು!
ನನ್ನ ಮಗಾ ಬದುಕಿಸಿ ಕೊಡಪ್ಪಾ! ನನಗಿರೋದು
ಇದೊಂದೇ ಒಂದು! ನಿನ್ನ ಹೊಟ್ಟೆ ತಣ್ಣಗಿರಲಿ!

**ಡಾಕ್ಟರ**

ಇರುವದು ಒಂದೇ ಒಂದು! ಒಂದೇ ಒಂದು!-
(ಮಗುವನ್ನು ಪರೀಕ್ಷಿಸಿ ನೋಡು ಮುಖವನ್ನು ಬೇರೆ ಕಡೆಗೆ ತಿರುಗಿಸಿಕೊಂಡು ದುಃಖದಿಂದ)
ಅಯ್ಯೊ! ಈ ಮಗುವನ್ನುಳಿಸುವದು ನನ್ನ ಪಾ
ಲಿಗೆ ಬರಲಿಲ್ಲಾ!
ದಯಾಮಯವಾದ ಸಾವೇ ಅದನ್ನು ಉಳಿಸಿ
ಕೊಂಡಿತು.

**ಮುದುಕ**

ಅಯ್ಯೋ! ಡಾಕ್ತರ್! ಆಗೋಯ್ತಾ;

**ಡಾಕ್ಟರ್**

ಹಾಲನ್ನು ವಾಪಸು ತೆಗೆದುಕೊಂಡು ಹೋಗು!
ನಾನು ಇದನ್ನು ಸಂಪಾದಿಸಲಿಲ್ಲ!

**ಮುದುಕ**

ಏ! ದಾಕ್ತರ್! ನೀನು ಇನ್ನೂ ಹುಡುಗ!
ನೀನೊಬ್ಬ ಶೂರ ಅಂತಾ ಹೆಮ್ಮೆ ಮಾಡ್ತೀ!
ಅದ ಬಿಟ್ಟು ಬಿಡು
ನೀನೊಬ್ಬ ಹುಚ್ಚ!

ನಿನ್ನ ಮಗಾಉಳಸ್ತೀನಿ ಅಂತಾ ನನ್ನಮಗಾ ಸಾಯುಸ್ತಿ ; ಈಗ ಆ ತಪ್ಪಿಗೆ ಅಳ್ತಾ ನಿನ್ನ ಮಗಾನೂ ಕೊಲ್ತಿದ್ದೀಯಾ।
ಹಾಂಗ್ ಮಾಡೋಕೆ ನಿನಗೆ ಹಕ್ಕಿಲ್ಲ।
ಹುಚ್ಚನ ಹಾಂಗಾಡಬೇಡ, ತಗೋ, ಈ ಹಾಲು

(ಡಾಕ್ಟರು ಹಾಲನ್ನು ತೆಗೆದುಕೊಂಡು ಹೆಂಗಸು ಅನುಸರಿಸುವಳು. ಬೆಳಕು ಇಳಿಮೊಗವಾಗುವುದು.)

**ಮುದುಕ**

(ಹುಚ್ಚನ ಹಾಗೆ ಆಡಿ).

ನಕ್ಕು ದಾಕ್ತರ್, ದಾಕ್ತರ್ ನೋಡು।
ಮಗಾ ಹೇಗೆ ನಗ್ತಾ ಅದೇ।
ನಮ್ಮ ಬಾಳನೋಡಿ ಅದು ಅಣಕಾ ಮಾಡ್ತಾದೆ.

(ತೆರೆಬೀಳುವದು)



ರಂಗಪ್ಪನ ಓದು ೦—೪—೦

ಶೇಖರಪ್ರಿಯಾ ೦—೪—೦

ಒಂದೇಒಂದು (ನಾಟಕ) ೦—೪—೦

ಭಂಡಾರ ೦—೪—೦

ಪತ್ರಚ್ಛೇದ ಮತ್ತು ಧೂಳಿಯ

ಚಿತ್ರಂ ೦—೬—೦

**ಕಲಾ ಪ್ರಥಮ ಸಂಪುಟ**

---

ಕ್ಯಾಲಿಕೊ ಬೈಂಡಾದುದು ೪—೦—೦

ಟಪಾಲು ಹಾಸಲು ಅಲಾಯಿದಾ.

"ಕಲಾ" ಕಾರ್ಯಾಲಯ ಕಲಾಮಂದಿರಂ,

ಬೆಂಗಳೂರು ನಗರ.

ಯೂನಿವರ್ಸಲ್ ಪವರ್ ಪ್ರೆಸ್, ಬಿ-ಸಿಟಿ.